ಈ ರೀತಿಯ ಅಧ್ಯಯನ ವರದಿಗಳು, ಭಾರತದಲ್ಲಿ ಶಾಲಾ ಶಿಕ್ಷಣದ ಗುಣಮಟ್ಟ ಸುಧಾರಿಸಲು ಮತ್ತು ಸಮತೆಯನ್ನು ಸಾಧಿಸಲು ಅಜೀಂ ಪ್ರೇಮ್‌ಜಿ ಫೌಂಡೇಷನ್ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಫಲಿತಗಳನ್ನು ಪ್ರಸ್ತುತಪಡಿಸುತ್ತದೆ. ನಮ್ಮ ಅಧ್ಯಯನದ ಫಲಿತಾಂಶವನ್ನು, ಶಿಕ್ಷಣ ತಜ್ಞರು ಗಮನಿಸಿರುವ, ಶಿಕ್ಷಣ ಕ್ಷೇತ್ರವು ಎದುರಿಸುತ್ತಿರುವ ಮುಖ್ಯ ಸಮಸ್ಯೆಗಳನ್ನು ಶೈಕ್ಷಣಿಕ ನೀತಿನಿಯಮ ರೂಪಿಸುವವರಿಗೆ ಮತ್ತು ಅದನ್ನು ಜಾರಿಗೊಳಿಸುವವರಿಗೆ ತಲುಪಿಸುವುದಾಗಿದೆ. ಈ ಅಧ್ಯಯನ ವರದಿಯಲ್ಲಿ ಪ್ರಕಟಗೊಂಡ ವಿಚಾರಗಳು ಸಂಶೋಧನಾ ತಂಡದ ನಿಲುವುಳಾಗಿವೆಯೇ ಹೊರತು, ಅವು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯವನ್ನು ಒಳಗೊಂಡು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ನಿಲುವು ಆಗಿರುವುದಿಲ್ಲ.

## ಆನ್‌ಲೈನ್ ಶಿಕ್ಷಣ ಕುರಿತ ಮಿಥ್ಯಗಳು

ಸಂಶೋಧನಾ ತಂಡ/ ಅಜೀಂ ಪ್ರೇಮ್‌ಜಿ ಫೌಂಡೇಷನ್

ಸಂಪರ್ಕಿಸಿ: field.research@azimpremjifoundation.org

# ಪ್ರಮುಖ ಸಾರಾಂಶ

ಕೋವಿಡ್ 19 ಎಂಬ ಪಿಡುಗು ಬದುಕಿನ ಎಲ್ಲಾ ಕ್ಷೇತ್ರಗಳನ್ನು ಅಸ್ತವ್ಯಸ್ತಗೊಳಿಸಿದೆ. ಶಾಲಾ ಕಾಲೇಜುಗಳು ಮತ್ತು ಇತರ ಶೈಕ್ಷಣಿಕ ಸಂಸ್ಥೆಗಳನ್ನು ಕಲಿಕೆಯ ಮುಂದುವರಿಕೆಗೆ ಪರ್ಯಾಯ ಮಾರ್ಗಗಳನ್ನು ಹುಡುಕಲು ದೂಡಿದೆ. ಕಳೆದ ಆರು ತಿಂಗಳಲ್ಲಿ, ಜಗತ್ತಿನಾದ್ಯಂತ ವಿವಿಧ ಬಗೆಯ ಡಿಜಿಟಲ್ ಅಥವಾ ಮಾಹಿತಿ ಮತ್ತು ಸಂವಹನ ತಂತ್ರಜ್ಞಾನ (ಐಸಿಟಿ) ಆಧರಿತ ಕಲಿಕೆಯ ಮಾರ್ಗಗಳನ್ನು ಪರಿಶೋಧಿಸಲಾಗಿದೆ. ನೇರ ಮುಖಾಮುಖಿ ತರಗತಿಗಳಿಗೆ ಹೋಲಿಸಿದಾಗ ಇವುಗಳಲ್ಲಿ ಬಹುತೇಕ ಆಯ್ಕೆಗಳು ಅಸೂಕ್ತವೂ, ದೋಷಯುಕ್ತವೂ ಆದ ಬೋಧನಾ ಮಾರ್ಗಗಳಾಗಿವೆ. ಈ ಮಾರ್ಗಗಳು ಶಾಲೆಗೆ ಹೋಗುವ, ವಿಶೇಷವಾಗಿ ಆರಂಭಿಕ ಹಂತದ ಮಕ್ಕಳಿಗೆ ಯಾರಿಗೆ ಬಹಳ ಆಪ್ತ ಬೋಧನೆಯ ಅಗತ್ಯವಿದೆಯೋ ಅವರಿಗೆ ಪರಿಣಾಮಕಾರಿಯಾಗಿಲ್ಲ. ಅಷ್ಟೇ ಅಲ್ಲದೆ ಆಧುನಿಕ ಉಪಕರಣಗಳನ್ನು ಮತ್ತು ಅದಕ್ಕೆ ಅಗತ್ಯವಿರುವ ಮೂಲಸೌಕರ್ಯಗಳನ್ನು ಪಡೆದುಕೊಳ್ಳಲಾಗದ ಅನೇಕ ಮಕ್ಕಳು ಕಲಿಕೆಯಿಂದ ಹೊರಗುಳಿದಿದ್ದಾರೆ. ಇತ್ತೀಚಿಗೆ ಹೊರಬರುತ್ತಿರುವ ಸಾಕ್ಷ್ಯಗಳ ಪ್ರಕಾರ ಈ ಆನ್‌ಲೈನ್ ಕಲಿಕೆಯ ಮಾರ್ಗಗಳು ಬಹುತೇಕ ಸಂದರ್ಭಗಳಲ್ಲಿ ಶಿಕ್ಷಣ ಮಾರುಕಟ್ಟೆಯಲ್ಲಿ ವಾಣಿಜ್ಯೀಕರಣಗೊಂಡ ಶಿಕ್ಷಣದ ಪ್ರಭಾವಕ್ಕೊಳಗಾಗಿವೆ. ಇಲ್ಲಿ ಶಿಕ್ಷಕರ ವೃತ್ತಿಪರ ಸಾಮರ್ಥ್ಯ ವೃದ್ಧಿಸಲು ಸಾಕಷ್ಟು ಪ್ರಯತ್ನದ ಕೊರತೆ ಮತ್ತು ಅದರ ಕುರಿತು ನಂಬಿಕೆ ಇಲ್ಲದಿರುವುದು ಎದ್ದು ಕಾಣುತ್ತಿದೆ.

ಈ ಹಿನ್ನೆಲೆಯಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್ನಿನ ಕ್ಷೇತ್ರಕಾರ್ಯದ ಸಂಶೋಧನಾ ತಂಡವು, 5 ರಾಜ್ಯಗಳ[1] 26 ಜಿಲ್ಲೆಗಳ, ಸರ್ಕಾರಿ ಶಾಲೆಗಳಲ್ಲಿನ 1522 ಶಿಕ್ಷಕರನ್ನು (1522 ಶಾಲೆಗಳಿಂದ) ಮತ್ತು 398 ಪೋಷಕರನ್ನು ಸಂದರ್ಶಿಸುವುದರ ಮೂಲಕ ಅಧ್ಯಯನವನ್ನು ಕೈಗೊಂಡಿತು. ಭಾರತದಾದ್ಯಂತ ಹರಡಿರುವ ಭೌಗೋಳಿಕ ಅನಾನುಕೂಲತೆಗಳಿಂದ ಕೂಡಿದ ಈ ರಾಜ್ಯಗಳ ಶಾಲೆಗಳಲ್ಲಿ 80,000ಕ್ಕೂ ಹೆಚ್ಚು ಮಕ್ಕಳು ಕಲಿಯುತ್ತಿದ್ದಾರೆ. ನಮ್ಮ ಅಧ್ಯಯನದ ಗುರಿಯು ಆನ್‌ಲೈನ್ ಕಲಿಕೆಯ ಸಂದರ್ಭದಲ್ಲಿ ಸರ್ಕಾರಿ ಶಾಲೆಗಳಲ್ಲಿನ ಶಿಕ್ಷಕರು ಮತ್ತು ಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದಾಗಿತ್ತು. ಈ ಸಮೀಕ್ಷೆಯಲ್ಲಿ ಶಿಕ್ಷಕರಿಗೆ ಮತ್ತು ಪೋಷಕರಿಗೆ ದೂರವಾಣಿಯ ಮೂಲಕ ಮತ್ತು ಸ್ವಂತ ಅಭಿಪ್ರಾಯಗಳನ್ನು ಹೇಳಲು ಸಾಧ್ಯವಾಗುವಂತಹ ಮುಕ್ತ ಪ್ರಶ್ನಾವಳಿಗಳಂತಹ ಸಲಕರಣೆಗಳನ್ನು ಬಳಸಲಾಯಿತು.

ಶಿಕ್ಷಕರು ಮತ್ತು ಪೋಷಕರೊಂದಿಗೆ ನಡೆಸಿದ ಈ ಸಮೀಕ್ಷೆಯು ಆನ್‌ಲೈನ್ ಕಲಿಕೆಯು ಪರಿಣಾಮಕಾರಿಯಾಗಿಲ್ಲ ಮತ್ತು ಅರ್ಥಪೂರ್ಣ ಕಲಿಕೆಯ ಅವಕಾಶಗಳನ್ನು ಒದಗಿಸಲು ಸಾಧ್ಯವಾಗುತ್ತಿಲ್ಲ ಎಂಬುದನ್ನು ತೋರಿಸುತ್ತದೆ. ಅದರೊಂದಿಗೆ ಅನೇಕ ಮಕ್ಕಳಿಗೆ ಈ ಆನ್‌ಲೈನ್ ಶಿಕ್ಷಣವನ್ನು ದೊರಕಿಸಿಕೊಳ್ಳಲಾಗುತ್ತಿಲ್ಲ ಮತ್ತು ಶಿಕ್ಷಕರು ವೃತ್ತಿಯ ಬಗ್ಗೆ ಹತಾಶರಾಗಿದ್ದಾರೆ (ಬಾಕ್ಸ್ 1ನ್ನು ನೋಡಿ) ಎಂಬುದನ್ನು ನಮ್ಮ ಕ್ಷಿಪ್ರ ಸಮೀಕ್ಷೆಯು ತಿಳಿಸುತ್ತದೆ. ತಂತ್ರಜ್ಞಾನದ ಅವಲಂಬನೆಯಿಂದಾಗಿ ಶೇಕಡ 80ರಷ್ಟು ವಿದ್ಯಾರ್ಥಿಗಳು ಕಲಿಕೆಯಿಂದ ವಂಚಿತರಾಗಿದ್ದಾರೆ ಮತ್ತು ಸಮರ್ಥ ಡಿಜಿಟಲ್ ಶಿಕ್ಷಣ ವ್ಯವಸ್ಥೆಗೆ ಬೇಕಾದ ಸೂಕ್ತ ಬೆಂಬಲ ನೀಡದ ಸರ್ಕಾರಗಳ ವೈಫಲ್ಯಗಳನ್ನು ಪ್ರತಿಫಲಿಸುತ್ತದೆ (VYAS 2020). ನಮ್ಮ ಅಧ್ಯಯನವು ಇಂತಹ ಸಂದರ್ಭದಲ್ಲಿ ಮಕ್ಕಳು ಶಾಲೆಗೆ ಹೋಗುವುದು ಕ್ಷೇಮವಲ್ಲ ಎಂಬ ಸಾಮಾನ್ಯವಾಗಿ ಚಾಲ್ತಿಯಲ್ಲಿರುವ ನಂಬಿಕೆಗೆ ವ್ಯತಿರಿಕ್ತವಾಗಿ ಬಹುತೇಕ ಪೋಷಕರು, ಸೂಕ್ತ ಆರೋಗ್ಯ ಸುರಕ್ಷಾ ಕ್ರಮ ಕೈಗೊಂಡರೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ತಯಾರಾಗಿದ್ದಾರೆ ಮತ್ತು ಯಾವುದೇ ಅನಾರೋಗ್ಯ ಉಂಟಾಗುವುದಿಲ್ಲ ಎಂಬ ಭಾವನೆ ತಳೆದಿದ್ದಾರೆ.

[1] ಛತ್ತೀಸ್‌ಘಡ್, ಮಧ್ಯಪ್ರದೇಶ ಮತ್ತು ರಾಜಸ್ಥಾನ ರಾಜ್ಯಗಳು ಸಾರ್ವಜನಿಕ ಶಾಲೆಗಳಲ್ಲಿ ವಿವಿಧ ರೀತಿಯ ಆನ್‌ಲೈನ್ ಬೋಧನೆಯನ್ನು ಜಾರಿಮಾಡಿವೆ. ಕರ್ನಾಟಕ ಮತ್ತು ಉತ್ತರಾಖಂಡ್ ರಾಜ್ಯಗಳು ಯಾವುದೇ ಆನ್‌ಲೈನ್ ಬೋಧನೆಯನ್ನು ಜಾರಿಗೊಳಿಸಿಲ್ಲ. ಆನ್‌ಲೈನ್ ಶಿಕ್ಷಣ ಜಾರಿಗೊಳಿಸಿದ ಮತ್ತು ಜಾರಿಗೊಳಿಸದ ಎರಡೂ ಬಗೆಯ ರಾಜ್ಯಗಳಲ್ಲಿಯೂ ಸಮೀಕ್ಷೆಯನ್ನು ನಡೆಸಲಾಗಿದೆ.

**ಬಾಕ್ಸ್ 1: ಫಲಿತಗಳು**

**ಫಲಿತ 1: ಆನ್‌ಲೈನ್ ಕಲಿಕೆಯ ಅವಕಾಶಗಳು ನಿಜವಾದ ಅರ್ಥದಲ್ಲಿ ಶಿಕ್ಷಣವನ್ನು ಒದಗಿಸುವಲ್ಲಿ ಪರಿಣಾಮಕಾರಿಯಾಗಿಲ್ಲ.**

ಬಹುತೇಕ ಎಲ್ಲಾ ಶಿಕ್ಷಕರು ಆನ್‌ಲೈನ್ ವಿಧಾನದಲ್ಲಿ ಅರ್ಥಪೂರ್ಣ ಕಲಿಕೆಯನ್ನು ಒದಗಿಸುವಲ್ಲಿ ತಮ್ಮ ಅಸಮರ್ಥತೆಯನ್ನು ಹೇಳಿಕೊಂಡಿದ್ದಾರೆ.

1.1 ಶೇಕಡ 80ಕ್ಕೂ ಹೆಚ್ಚು ಶಿಕ್ಷಕರು ಮಕ್ಕಳೊಡನೆ ಈ ವಿಧಾನದಲ್ಲಿ ಭಾವನಾತ್ಮಕ ಸಂಬಂಧ ಹೊಂದಲಾಗುತ್ತಿಲ್ಲ ಎಂದಿದ್ದಾರೆ.
1.2 ಶೇಕಡ 90ಕ್ಕೂ ಹೆಚ್ಚು ಶಿಕ್ಷಕರು ಮಕ್ಕಳ ಕಲಿಕೆಯನ್ನು ಸೂಕ್ತವಾಗಿ ಮೌಲ್ಯಮಾಪನ ಮಾಡಲಾಗುತ್ತಿಲ್ಲ ಎಂದಿದ್ದಾರೆ.
1.3 ಬಹುತೇಕ, ಶೇಕಡ 50ರಷ್ಟು ಶಿಕ್ಷಕರು ಆನ್‌ಲೈನ್‌ನಲ್ಲಿ ಕಳುಹಿಸಲಾದ ಮನೆಗೆಲಸಗಳನ್ನು ಮಕ್ಕಳು ಮಾಡುತ್ತಿಲ್ಲ, ಆದ್ದರಿಂದ ಆ ಮಕ್ಕಳು ಕಲಿಕೆಯಲ್ಲಿ ಹಿಂದುಳಿಯಲು ಕಾರಣವಾಗಿದೆ ಎನ್ನುತ್ತಾರೆ.
1.4 ಆನ್‌ಲೈನ್ ತರಗತಿಗಳ ಅವಧಿ ಮತ್ತು ತರಗತಿಯನ್ನು ಎಷ್ಟು ಬಾರಿ ನಡೆಸಿದ್ದಾರೆ ಎನ್ನುವುದಕ್ಕೆ ಸಂಬಂಧಿಸಿದ ದತ್ತಾಂಶವು ಮಕ್ಕಳ ಕಲಿಕೆಗೆ ಅವರೊಂದಿಗೆ ಸಾಕಷ್ಟು ಸಮಯವನ್ನು ಕಳೆಯಲಾಗುತ್ತಿಲ್ಲ ಎಂಬುದನ್ನು ತೋರಿಸುತ್ತದೆ.
1.5 ಶೇಕಡ 70ರಷ್ಟು ಪೋಷಕರು ಮಕ್ಕಳು ಸರಿಯಾಗಿ ಕಲಿಯಲಾಗುತ್ತಿಲ್ಲವೆಂದು ಆನ್‌ಲೈನ್ ಬೋಧನೆಯ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿದ್ದಾರೆ.

**ಫಲಿತ 2: ಬಹುತೇಕ, ಶೇಕಡ 60ರಷ್ಟು ಮಕ್ಕಳಿಗೆ ಆನ್‌ಲೈನ್ ಶಿಕ್ಷಣದ ಲಭ್ಯತೆ ಸಾಧ್ಯವಾಗುತ್ತಿಲ್ಲ**

ಇದಕ್ಕೆ ಕಾರಣಗಳೆಂದರೆ, ಸ್ಮಾರ್ಟ್‌ಫೋನ್ ಇಲ್ಲದಿರುವುದು, ಇದ್ದರೂ ಮನೆಯ ಎಲ್ಲ ಮಕ್ಕಳೂ ಒಂದೇ ಫೋನ್ ಅನ್ನು ಬಳಸಬೇಕಾಗುವುದು, ಆನ್‌ಲೈನ್ ತರಗತಿಗೆ ಅವಶ್ಯವಿರುವ ಆ್ಯಪ್ ಉಪಯೋಗಿಸಲು ಬಾರದಿರುವುದು ಮುಂತಾದವು. ಈ ಕಲಿಕೆಯ ಅವಕಾಶದ ಲಭ್ಯತೆಯ ವಿಷಯದಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳು ಇನ್ನೂ ಹೆಚ್ಚಿನ ತೊಂದರೆಯನ್ನು ಅನುಭವಿಸುತ್ತಾರೆ. ಈ ವಿಕಲಚೇತನ ಮಕ್ಕಳನ್ನು ಹೊಂದಿರುವ ತರಗತಿಗಳ ಶೇಕಡ 90ರಷ್ಟು ಶಿಕ್ಷಕರು ಆ ಮಕ್ಕಳು ಕಲಿಕೆಯಲ್ಲಿ ಭಾಗವಹಿಸಲಾಗುತ್ತಿಲ್ಲ ಎನ್ನುವುದನ್ನು ಒಪ್ಪಿಕೊಳ್ಳುತ್ತಾರೆ.

**ಫಲಿತ 3: ಈ ಅಧ್ಯಯನವು ಪಿಡುಗಿನ ಕಾರಣದಿಂದಾಗಿ ಶಾಲಾಶಿಕ್ಷಣಕ್ಕೆ ತೊಂದರೆಯಾಗುತ್ತಿರುವುದರ ಬಗ್ಗೆ ಪೋಷಕರ ಅಭಿಪ್ರಾಯವನ್ನು ಸಂಗ್ರಹಿಸುವ ಗುರಿಯನ್ನೂ ಹೊಂದಿತ್ತು. ಅನೇಕ ಪೋಷಕರು ಅವಶ್ಯಕವಾದ ಆರೋಗ್ಯ ಸುರಕ್ಷಾ ಕ್ರಮಗಳನ್ನು ಕೈಗೊಂಡು ಶಾಲೆಗಳನ್ನು ತೆರೆಯಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.**

ಬಹುತೇಕ ಶೇಕಡ 90ರಷ್ಟು ಪೋಷಕರು ಅವಶ್ಯಕ ಆರೋಗ್ಯ ಸುರಕ್ಷಾ ಕ್ರಮಗಳಿದ್ದರೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ತಯಾರಾಗಿದ್ದಾರೆ. ಶೇಕಡ 65ರಷ್ಟು ಪೋಷಕರು ಶಾಲೆಗಳು ತೆರೆಯಲ್ಪಟ್ಟಾಗ ಅದರಿಂದ ತಮ್ಮ ಮಕ್ಕಳಿಗೆ ತೊಂದರೆಯಾಗಲಾರದು ಎಂದು ಅಭಿಪ್ರಾಯಪಡುತ್ತಾರೆ.

ಮುಕ್ತ ಪ್ರಶ್ನೆಗಳಿಗೆ ಉತ್ತರಗಳನ್ನು ಆಯ್ದ ಶಿಕ್ಷಕರಿಂದ ಪಡೆದುಕೊಳ್ಳಲಾಯಿತು ಮತ್ತು ಅವೂ ಕೂಡಾ ಸಮೀಕ್ಷೆಯ ಪರಿಮಾಣಾತ್ಮಕ ಫಲಿತಾಂಶಗಳನ್ನೇ ಬೆಂಬಲಿಸಿದವು. ಈ ಪ್ರಶ್ನೆಗಳ ವಿಶ್ಲೇಷಣೆಯು ಶಿಕ್ಷಕರ ವೃತ್ತಿಯ ಬಗೆಗಿನ ಹತಾಶೆಯನ್ನು ಸ್ಪಷ್ಟವಾಗಿ ಹೊರಹಾಕುತ್ತಿದೆ ಮತ್ತು ಶಿಕ್ಷಕರ ಪ್ರತಿಕ್ರಿಯೆಗಳು ಅವರು ತೆಗೆದುಕೊಂಡ ಪರ್ಯಾಯ ಮಾರ್ಗಗಳನ್ನು ತೋರಿಸುತ್ತಿವೆ. ಅವರೆಲ್ಲ ಹೀಗೆ ಸಾರ್ವಜನಿಕ ಶಾಲೆಗಳು ಮುಚ್ಚಿದಾಗ ತಮ್ಮ ಮಕ್ಕಳನ್ನು ಕಲಿಕೆಯತ್ತ ತಿರುಗಿಸಲು ಅರ್ಥಪೂರ್ಣ ಕ್ರಮಗಳನ್ನು ಕೈಗೊಂಡಿದ್ದರೂ ದೇಶದಾದ್ಯಂತ ಬಹುಸಂಖ್ಯೆಯ ಶಾಲಾ ಮಕ್ಕಳು ಈ ಆನ್‌ಲೈನ್ ಶಿಕ್ಷಣವನ್ನು ಪಡೆದುಕೊಳ್ಳಲು ಅಸಾಧ್ಯವಾಗಿರುವುದನ್ನು ಹೇಳುತ್ತಿದ್ದಾರೆ.

ಕೆಲವು ರಾಜ್ಯ ಸರ್ಕಾರಗಳು ಕೈಗೊಂಡ ಅಸಮರ್ಪಕ ಡಿಜಿಟಲ್ ಮೀಡಿಯಾಗಳ ನಿರ್ವಹಣೆಯು ರಾಜ್ಯ ಶಿಕ್ಷಣ ಇಲಾಖೆಗಳನ್ನು ಆನ್‌ಲೈನ್ ಶಿಕ್ಷಣವನ್ನು ಕೈಬಿಟ್ಟು ನೇರ ಬೋಧನಾ–ಕಲಿಕಾ ಮಾರ್ಗಗಳನ್ನು, ಅಂದರೆ, ಶಿಕ್ಷಕರು ಮಕ್ಕಳನ್ನು ಅವರ ಮನೆ ಅಥವಾ ನೆರೆಹೊರೆಯ ಪರಿಸರದಲ್ಲೇ ಭೇಟಿ ಮಾಡುವ ವಿಧಾನವನ್ನು ಆಯ್ದುಕೊಳ್ಳಲು ಅನುವು ಮಾಡಿಕೊಟ್ಟಿತು. ಉದಾಹರಣೆಗೆ, ಛತ್ತೀಸ್‌ಘಢ್‌ದ 'ನಿಮ್ಮ ನೆರೆಯಲ್ಲೇ ಶಿಕ್ಷಣ' (ಪಡಾಯೀ ತುಹಾರ್ ಪಾರ), ಮಧ್ಯಪ್ರದೇಶದ 'ನಮ್ಮ ಮನೆ – ನಮ್ಮ ಶಾಲೆ' (ಹಮಾರ ಘರ್–ಹಮಾರ ವಿದ್ಯಾಲಯ್) ಹಾಗೂ ಕರ್ನಾಟಕದ 'ವಿದ್ಯಾಗಮ' ಯೋಜನೆಗಳು ಈ ಬಗೆಯವಾಗಿವೆ.

ಒಟ್ಟಿನಲ್ಲಿ ಆನ್ ಲೈನ್ ವಿಧಾನಲ್ಲಿ ಶಾಲಾ ಮಕ್ಕಳಿಗೆ ಶಿಕ್ಷಣ ನೀಡುತ್ತಿರುವುದು ದೋಷಪೂರಿತವಾಗಿದೆ. ಅದರಲ್ಲೂ ವಿಶೇಷವಾಗಿ ಪ್ರತಿಕೂಲ ಪರಿಸ್ಥಿತಿಗಳಲ್ಲಿರುವ ಮಕ್ಕಳಿಗೆ ಇದು ಇನ್ನೂ ಸವಾಲಿನದ್ದಾಗಿದೆ. ಹೀಗಾಗಿ ಈ ಅಧ್ಯಯನವು ಇತ್ತೀಚಿನ ಇತರೆ ಕೆಲವು ಅಧ್ಯಯನಗಳ ಫಲಿತಗಳನ್ನೇ ಬೆಂಬಲಿಸುತ್ತದೆ. ಅಲ್ಲದೆ, ಈ ಅಧ್ಯಯನವು ಮಕ್ಕಳಿಗೆ ಮತ್ತು ಶಿಕ್ಷಕರಿಗೆ ಅಗತ್ಯವಿರುವ ಆರೋಗ್ಯ ಮತ್ತು ಸುರಕ್ಷತೆಯ ಕ್ರಮಗಳನ್ನು ಕೈಗೊಂಡು ತಡಮಾಡದೆ ಹಂತಹಂತವಾಗಿ ಶಾಲೆಗಳನ್ನು ತೆರೆಯುವುದನ್ನು ಶಿಫಾರಸು ಮಾಡುತ್ತದೆ. ಅದೇ ವೇಳೆ, ಮಧ್ಯಂತರದಲ್ಲಿ ಮಕ್ಕಳೊಂದಿಗೆ ನೇರ ಮಾತುಕತೆ ಸಾಧಿಸಲು ಸಾಧ್ಯವಾಗುವಂತೆ ಸಮುದಾಯ ಆಧರಿತ ಪರಿಹಾರಗಳನ್ನು ಹುಡುಕಲು ಶಿಕ್ಷಕರನ್ನು ಬೆಂಬಲಿಸಿ ಪ್ರೋತ್ಸಾಹಿಸಬೇಕು ಎನ್ನುತ್ತದೆ.



# 1. ಪೀಠಿಕೆ

ಕೋವಿಡ್ –19 ಮತ್ತು ನಂತರದ ದಿನಗಳಲ್ಲಿ, ಶಾಲೆಗಳನ್ನು ಮುಚ್ಚಿದ ಕಾರಣ ಮುಖ್ಯವಾಹಿನಿಯ ಶಾಲಾ ಶಿಕ್ಷಣ ವ್ಯವಸ್ಥೆಗೆ ಆನ್‌ಲೈನ್ ನ ಪರ್ಯಾಯ ಕಲಿಕೆಯ ಮಾರ್ಗಗಳನ್ನು ಹುಡುಕುವ ಅವಶ್ಯಕತೆಯನ್ನು ಹೆಚ್ಚಿಸಿತು. ಜಗತ್ತಿನಾದ್ಯಂತ (ಉದಾ. ವೇಗಾಸ್ 2020, ಯುನಿಸೆಫ್ 2020) ಮತ್ತು ನಮ್ಮ ದೇಶದಲ್ಲಿ[2] ನಡೆದಿರುವ ಅನೇಕ ಅಧ್ಯಯನಗಳು ಮತ್ತು ವರದಿಗಳು ಆನ್‌ಲೈನ್ ಕಲಿಕೆಯನ್ನು ಅಪ್ರಾಯೋಗಿಕವೆಂದು ಕರೆದು ಆ ವ್ಯವಸ್ಥೆಯನ್ನು ನಿರಾಕರಿಸುತ್ತವೆ. ಏಕೆಂದರೆ ಡಿಜಿಟಲ್ ತಂತ್ರಜ್ಞಾನದ ಲಭ್ಯತೆ ಅದರಲ್ಲೂ ವಿಶೇಷವಾಗಿ ಅವಕಾಶವಂಚಿತ ಮಕ್ಕಳಿಗೆ ಅದು ದುಸ್ತರವಾಗಿರುವುದು ಮತ್ತು ಶಿಕ್ಷಕರಲ್ಲೂ ಸಾಕಷ್ಟು ಪೂರ್ವಸಿದ್ಧತೆ ಇಲ್ಲದಿರುವುದು ಎದ್ದು ಕಾಣುತ್ತದೆ. ಅದರೊಂದಿಗೆ ಡಿಜಿಟಲ್ ಬೋಧನೆಯು ಸಾಮಾನ್ಯ ತರಗತಿ ಬೋಧನೆಗೆ ಪರ್ಯಾಯವಾಗಬಾರದು ಎಂಬುದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ (ಮುಕುಂದ 2019, ಪುಟ 301–355). ಇದರ ಜೊತೆಗೆ ಡಿಜಿಟಲ್ ಮತ್ತು ಮಾಹಿತಿ ಸಂವಹನ ತಂತ್ರಜ್ಞಾನಾಧಾರಿತ ಬೋಧನೆಯ ಮಾದರಿಗಳು ವಾಣಿಜ್ಯಿಕ ಆಸಕ್ತಿಯುಳ್ಳ ಮಾರುಕಟ್ಟೆ ಆಧರಿತ[3] ಪರಿಹಾರಗಳೊಂದಿಗೆ ತಳುಕು ಹಾಕಿಕೊಂಡಿವೆ.

ಇಂಥ ಸಂದರ್ಭದಲ್ಲಿ, ಏಪ್ರಿಲ್ 2020ರ ನಂತರ ರಾಜ್ಯ ಶಿಕ್ಷಣ ಇಲಾಖೆಗಳು ತರಾತುರಿಯಲ್ಲಿ ಆನ್‌ಲೈನ್ ಬೋಧನೆಯನ್ನು ಆಯ್ದುಕೊಂಡಾಗ ಸಾರ್ವಜನಿಕ ಶಾಲಾ ವ್ಯವಸ್ಥೆಯ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಎದುರಿಸಿದ ತೊಂದರೆಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿತ್ತು. ಈ ಅಧ್ಯಯನವು ದೇಶದಾದ್ಯಂತ ಆಯ್ಕೆ ಮಾಡಿದ್ದ ಐದು ರಾಜ್ಯಗಳಲ್ಲಿನ ಸಾರ್ವಜನಿಕ ಶಾಲೆಗಳ ಶಿಕ್ಷಕರು ಮತ್ತು ಪೋಷಕರನ್ನು ದೂರವಾಣಿ ಮೂಲಕ ಸಂದರ್ಶಿಸಿ ಸಂಗ್ರಹಿಸಿದ ಪ್ರಾಥಮಿಕ ದತ್ತಾಂಶವನ್ನು ಬಳಸಿ ತಯಾರಿಸಿದ ವರದಿಯಾಗಿದೆ. ಈ ಐದರಲ್ಲಿ ಮೂರು ರಾಜ್ಯಗಳು – ಛತ್ತೀಸ್‌ಘಡ್, ಮಧ್ಯಪ್ರದೇಶ ಮತ್ತು ರಾಜಸ್ಥಾನ – ಕಳೆದ ಕೆಲವು ತಿಂಗಳುಗಳಿಂದ ವಿವಿಧ ಬಗೆಯ ಆನ್‌ಲೈನ್ ಬೋಧನಾಕ್ರಮಗಳನ್ನು ಅಲ್ಲಿನ ಸರ್ಕಾರಿ ಶಾಲೆಗಳಲ್ಲಿ ಜಾರಿಮಾಡಿವೆ. ಆದರೆ ಕರ್ನಾಟಕ ಮತ್ತು ಉತ್ತರಾಖಂಡ್ ರಾಜ್ಯಗಳು ಆ ರೀತಿಯ ಯಾವುದೇ ರಾಜ್ಯಮಟ್ಟದ ಆನ್‌ಲೈನ್ ಬೋಧನಾ ಉಪಕ್ರಮಗಳನ್ನು ಜಾರಿಗೆ ತಂದಿಲ್ಲ.

ಆನ್‌ಲೈನ್ ಕಲಿಕೆಯ ಬಗ್ಗೆ ನಡೆಸಿದ ಅಧ್ಯಯನದಿಂದ ಅನೇಕ ನಿರ್ಣಾಯಕವಾದ ವಿಚಾರಗಳು ಹೊರಬಿದ್ದಿವೆ. ಅವುಗಳೆಂದರೆ, ಕುಟುಂಬಗಳಿಗೆ ಮತ್ತು ಮಕ್ಕಳಿಗೆ ಲಭ್ಯವಿರುವ ಆನ್‌ಲೈನ್ ಸೇವೆ ಕಳಪೆ ಮಟ್ಟದ್ದಾಗಿರುವುದು, ಅತ್ಯಲ್ಪ ಹಾಗೂ ಅಸಮರ್ಪಕ ಬೋಧನಾ–ಕಲಿಕೆಯ ಪ್ರಕ್ರಿಯೆಗಳು, ಶಿಕ್ಷಕರಲ್ಲಿ ಡಿಜಿಟಲ್ ವೇದಿಕೆಗಳ ಕುರಿತಾದ ತಿಳುವಳಿಕೆಯ ಕೊರತೆ ಅಥವಾ ಅದನ್ನು ಸಮರ್ಥವಾಗಿ ಬಳಸಲು ಬಾರದ ಅಸಹಾಯಕತೆ ಮತ್ತು ಅದನ್ನು ಸರಿದೂಗಿಸುವುದಕ್ಕೆ ಬೇಕಾದ ತರಬೇತಿ ಹಾಗು ಬೆಂಬಲಗಳು ಇಲ್ಲದಿರುವುದು.

---

[2] ಉದಾಹರಣೆಗೆ ನೋಡಿ, 'Status Report- Government and Private Schools During COVID-19' by Oxfam, India; 'Are schools in Karnataka ready for a post-COVID 19 world?' by the NGO, Dream a Dream and; 'Scenario Amidst Covid-19: On-ground Situations and Possible Solutions' by the NGO, Smile Foundation.

[3] ಉದಾಹರಣೆಗೆ, ನೋಡಿ Online Education in India: 2021', a study by KPMG and Google in May 2017; URL: https://assets. kpmg/content/dam/kpmg/in/pdf/2017/05/Online-Education-in-India-2021.pdf. Also see, https://www.india-briefing.com/news/investing-indias-education-market-after-covid-19-new-growthdrivers-20330.html/

**ಕೋಷ್ಟಕ 1: ಸಮೀಕ್ಷೆಗೊಳಗಾದ ಶಿಕ್ಷಕರು ಮತ್ತು ಪೋಷಕರು**

| ರಾಜ್ಯಗಳು | ಜಿಲ್ಲೆಗಳು | ಶಿಕ್ಷಕರ ಸಂಖ್ಯೆ | ಪೋಷಕರ ಸಂಖ್ಯೆ |
|---|---|---|---|
| ಆನ್‌ಲೈನ್ ಶಿಕ್ಷಣ ಜಾರಿಗೊಳಿಸಿದ ರಾಜ್ಯಗಳು: ಛತ್ತೀಸ್‌ಘಡ್, ಮಧ್ಯಪ್ರದೇಶ, ರಾಜಸ್ಥಾನ | 12 | 634 | 179 |
| ಆನ್‌ಲೈನ್ ಶಿಕ್ಷಣ ಜಾರಿಗೊಳಿಸದ ರಾಜ್ಯಗಳು: ಕರ್ನಾಟಕ, ಉತ್ತರಾಖಂಡ್ | 14 | 888 | 219 |
| ಒಟ್ಟು | 26 | 1522 | 398 |

ಬಹುಶಃ ರಾಜ್ಯ ಶಿಕ್ಷಣ ಇಲಾಖೆಗಳು ತಮ್ಮ ಆನ್‌ಲೈನ್ ಮಾದರಿಗಳ ಆರಂಭದ ತಪ್ಪು ಹೆಜ್ಜೆಗಳನ್ನು ಅರಿತುಕೊಂಡಿವೆ. ಹಾಗಾಗಿ ಈಗ ಸರ್ಕಾರಿ ಶಾಲೆಗಳ ಮಕ್ಕಳ ಜೊತೆಗೆ ಶಿಕ್ಷಕರೇ ಮಕ್ಕಳನ್ನು ಭೇಟಿ ಮಾಡುವಂತಹ ನೇರ ಸಂಪರ್ಕದ ಮತ್ತು ಸಮುದಾಯ ಆಧರಿತ ತರಗತಿಗಳನ್ನು ನಡೆಸುವಂತಹ ಕಾರ್ಯಕ್ರಮಗಳನ್ನು ಆಯೋಜಿಸುತ್ತಿವೆ. ಇದು, ಅಗತ್ಯ ಆರೋಗ್ಯ ಮತ್ತು ಸುರಕ್ಷತಾ ಕ್ರಮಗಳನ್ನು ಕೈಗೊಂಡರೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಪೋಷಕರು ತಯಾರಾಗಿರುವುದನ್ನು ತೋರಿಸುತ್ತದೆ ಮತ್ತು ಸಾರ್ವಜನಿಕ ಶಾಲೆಗಳನ್ನು ಆದಷ್ಟು ಬೇಗ ತೆರೆಯಬೇಕೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತಿದೆ.

ಈ ಅಧ್ಯಯನವು, ಒಟ್ಟಾರೆಯಾಗಿ, ಸಾರ್ವಜನಿಕ ಶಾಲಾ ವ್ಯವಸ್ಥೆಯಲ್ಲಿ ಆನ್‌ಲೈನ್ ಕಲಿಕೆಯ ಜೊತೆ ತಳುಕು ಹಾಕಿಕೊಂಡ ಸವಾಲುಗಳ ಸ್ವರೂಪವು ಸಂಕೀರ್ಣವಾಗಿರುವುದನ್ನು ಮತ್ತು ಮೂಲಭೂತವಾಗಿ ಆನ್‌ಲೈನ್ ವಿಧಾನವು ಪರಿಣಾಮಕಾರಿಯಾಗಿಲ್ಲದಿರುವುದನ್ನು ಎತ್ತಿತೋರಿಸುತ್ತದೆ. ಅಧ್ಯಯನದ ಫಲಿತಗಳು, ಇತ್ತೀಚಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಗಳು ಕೈಗೆತ್ತಿಕೊಂಡಿರುವ ಭೌತಿಕ ಉಪಸ್ಥಿತಿ ಬೇಡುವಂತಹ ಸಾಂಪ್ರದಾಯಿಕ ಪದ್ಧತಿಗಳನ್ನು ಅಂದರೆ, ಶಿಕ್ಷಕರು–ಮಕ್ಕಳು ಮುಖಾಮುಖಿಯಾಗುವಂತಹ ಕಲಿಕಾ ಮಾರ್ಗಗಳನ್ನೇ ಮುಂದುವರಿಸಲು ಸೂಚಿಸುತ್ತದೆ. ಜೊತೆಯಲ್ಲಿ ಶಿಕ್ಷಕರು ಮತ್ತು ಮಕ್ಕಳೊಂದಿಗೆ ಇಬ್ಬರಿಗೂ ಸೂಕ್ತ ಆರೋಗ್ಯ ಸುರಕ್ಷಾ ಕ್ರಮಗಳನ್ನು ಕೈಗೊಂಡು ಹಂತಹಂತವಾಗಿ ಶಾಲೆಗಳನ್ನು ತೆರೆಯಲು ಸಲಹೆ ನೀಡುತ್ತದೆ. ಇದು ಸಾರ್ವಜನಿಕ ಶಾಲೆಗಳ ಮಕ್ಕಳನ್ನು ಕಲಿಕೆಯ ಹಾದಿಯಲ್ಲಿ ಮುನ್ನಡೆಸಲು ಜರೂರಾಗಿ ತೆಗೆದುಕೊಳ್ಳಲೇಬೇಕಾದ ಕ್ರಮವಾಗಿದೆ.



# 2. ಫಲಿತಗಳು

## 2.1 ಬಹುತೇಕ ಮಕ್ಕಳು ಆನ್‌ಲೈನ್ ಕಲಿಕೆಯ ಅವಕಾಶಗಳಿಂದ ವಂಚಿತರಾಗುತ್ತಿದ್ದಾರೆ

ಆನ್‌ಲೈನ್ ಶಿಕ್ಷಣ ಜಾರಿಯಲ್ಲಿರುವ ರಾಜ್ಯಗಳ ಶಿಕ್ಷಕರು ಹೇಳುವಂತೆ ನಿಯತವಾದ ತರಗತಿಗಳಿಗೆ ಹಾಜರಿರುತ್ತಿದ್ದ 30,511 ಮಕ್ಕಳಲ್ಲಿ 11,474 ಮಕ್ಕಳು ಮಾತ್ರ ಆನ್‌ಲೈನ್ ತರಗತಿಗಳಲ್ಲಿ ಭಾಗವಹಿಸುತ್ತಿದ್ದರು. ಸಮೀಕ್ಷೆ ನಡೆಸಿದ ಶಾಲೆಗಳಲ್ಲಿ ಕಂಡುಬಂದಂತೆ ಸರಾಸರಿ ಶೇಕಡ 42ರಷ್ಟು ಮಕ್ಕಳು ಮಾತ್ರ ಆನ್‌ಲೈನ್ ತರಗತಿಗಳಿಗೆ ಹಾಜರಾಗುತ್ತಿದ್ದರು. ಅಂದರೆ ಸುಮಾರು ಶೇಕಡ 60ರಷ್ಟು ಮಕ್ಕಳಿಗೆ ಈ ಆನ್‌ಲೈನ್ ಶಿಕ್ಷಣವನ್ನು ಪಡೆದುಕೊಳ್ಳುವ ಅವಕಾಶಗಳಿಲ್ಲ.

ಆನ್‌ಲೈನ್ ಕಾರ್ಯಕ್ರಮ ಜಾರಿಯಲ್ಲಿರುವ ರಾಜ್ಯಗಳ 110 ಜನ ಶಿಕ್ಷಕರ ತರಗತಿಗಳಲ್ಲಿ ವಿಶೇಷ ಅಗತ್ಯತೆಯಿರುವ ಮಕ್ಕಳು ಇದ್ದು, ಆ ಪೈಕಿ ಕೇವಲ 8 (7%) ಶಿಕ್ಷಕರು ಮಾತ್ರ ಅಂತಹ ಮಕ್ಕಳು ಆನ್‌ಲೈನ್ ತರಗತಿಗಳಿಗೆ ಹಾಜರಾಗುತ್ತಿರುವುದನ್ನು ಖಚಿತಪಡಿಸಿದ್ದಾರೆ.

ಶಿಕ್ಷಕರ ಸಮೀಕ್ಷೆಯಲ್ಲಿ, ನಿಯತವಾಗಿ ಶಾಲೆಗೆ ಹಾಜರಾಗುತ್ತಿದ್ದ ಮಕ್ಕಳಲ್ಲಿ ಎಷ್ಟು ಜನ ಸ್ಮಾರ್ಟ್‌ಫೋನ್ ಹೊಂದಿದ್ದಾರೆ ಮತ್ತು ಆನ್‌ಲೈನ್ ತರಗತಿಗೆ ಹಾಜರಾಗುತ್ತಿದ್ದಾರೆ ಎಂದು ಶಿಕ್ಷಕರನ್ನು ಕೇಳಲಾಯಿತು. ಕೋಷ್ಟಕ 2ರಲ್ಲಿ ತೋರಿಸಿರುವಂತೆ ಸರಾಸರಿ ಶೇಕಡ 31ರಷ್ಟು ಮಕ್ಕಳಿಗೆ ಮಾತ್ರ ಆನ್‌ಲೈನ್ ತರಗತಿಗೆ ಹಾಜರಾಗುವುದಕ್ಕೆ ಸ್ಮಾರ್ಟ್‌ಫೋನ್ ಲಭ್ಯತೆ ಇದೆ ಎಂಬುದು ಶಿಕ್ಷಕರ ಅಭಿಪ್ರಾಯವಾಗಿದೆ. ಇದೇ ಅಂಶವನ್ನು ಪೋಷಕರ ದೃಷ್ಟಿಕೋನದಿಂದ ಪರಿಶೀಲಿಸಿದಾಗ, ಒಟ್ಟಾರೆ ಶೇಕಡ 87ರಷ್ಟು ಪೋಷಕರು ಸ್ಮಾರ್ಟ್‌ಫೋನ್ ಹೊಂದಿರುವುದು ಕಂಡುಬಂದಿತಾದರೂ, ಅವರಲ್ಲಿ ಒಂದಕ್ಕಿಂತ ಹೆಚ್ಚು ಸ್ಮಾರ್ಟ್‌ಫೋನ್ ಹೊಂದಿರುವವರು ಶೇಕಡ 22ರಷ್ಟು ಪೋಷಕರು ಮಾತ್ರ ಎಂದು ಗೊತ್ತಾಗಿದೆ. ಇದರಿಂದಾಗಿ, ಶಿಕ್ಷಕರೊಂದಿಗಿನ ಚರ್ಚೆಯಿಂದಲೂ ಸ್ಪಷ್ಟವಾದಂತೆ, ಮಕ್ಕಳಿಗೆ ಸ್ಮಾರ್ಟ್‌ಫೋನ್‌ನ ಲಭ್ಯತೆಯ ಅವಕಾಶಕ್ಕೆ ಮಿತಿಯಿದೆ. ಬಹಳ ಮಂದಿ ಪೋಷಕರು ತಮ್ಮ ಸ್ಮಾರ್ಟ್‌ಫೋನ್‌ಗಳನ್ನು ತಮ್ಮೊಂದಿಗೆ ತಾವು ಕೆಲಸ ಮಾಡುವ ಸ್ಥಳಕ್ಕೆ ಕೊಂಡೊಯ್ಯುವುದರಿಂದ, ಅವು ಮನೆಯಲ್ಲಿ ಮಕ್ಕಳಿಗೆ ಆನ್‌ಲೈನ್ ಪಾಠಗಳನ್ನು ಕೇಳುವುದಕ್ಕೆ ದೊರೆಯುತ್ತಿರಲಿಲ್ಲ.

**ಕೋಷ್ಟಕ 2: ಸ್ಮಾರ್ಟ್‌ಫೋನ್‌ನ ಲಭ್ಯತೆ ಹೊಂದಿದ ಪೋಷಕರು ಮತ್ತು ಮಕ್ಕಳು**

| | ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳು | ಆನ್‌ಲೈನ್ ಶಿಕ್ಷಣ ಜಾರಿಯಾಗದ ರಾಜ್ಯಗಳು | ಒಟ್ಟು |
|---|---|---|---|
| **ಶಿಕ್ಷಕರ ಸಮೀಕ್ಷೆಯಲ್ಲಿ** | | | |
| ನಿಯತವಾದ ತರಗತಿಗಳಲ್ಲಿರುವ ಮಕ್ಕಳು | 30,511 | 49,577 | 80,088 |
| ಆನ್‌ಲೈನ್ ತರಗತಿಗೆ ಸ್ಮಾರ್ಟ್‌ಫೋನ್ ಪಡೆದ ಮಕ್ಕಳು | 8,650 | 13,595 | 22,245 |
| ಆನ್‌ಲೈನ್ ತರಗತಿಗೆ ಸ್ಮಾರ್ಟ್‌ಫೋನ್ ಸುಲಭವಾಗಿ ಲಭ್ಯವಿರುವ ಮಕ್ಕಳ ಸರಾಸರಿ (%) | 32 | 29 | 31 |
| **ಪೋಷಕರ ಸಮೀಕ್ಷೆಯಲ್ಲಿ** | | | |
| ಸ್ಮಾರ್ಟ್‌ಫೋನ್ ಹೊಂದಿದ ಪೋಷಕರ ಸಂಖ್ಯೆ(%) | 91 | 85 | 87 |
| ಒಂದಕ್ಕಿಂತ ಹೆಚ್ಚು ಸ್ಮಾರ್ಟ್‌ಫೋನ್ ಹೊಂದಿದ ಪೋಷಕರ ಸಂಖ್ಯೆ(%) | 20 | 24 | 22 |

ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳ ಶಿಕ್ಷಕರು ಮಕ್ಕಳಿಗೆ ಸ್ಮಾರ್ಟ್‌ಫೋನ್ ಲಭ್ಯವಿರುವ ಕುರಿತು ಕೇಳಲಾದ ಮುಕ್ತ ಪ್ರಶ್ನೆಗಳಿಗೆ ನೀಡಿದ ಪ್ರತಿಕ್ರಿಯೆಗಳು ಪ್ರಶ್ನಾವಳಿಯ ಮೂಲಕ ನಡೆಸಿದ ಸಮೀಕ್ಷೆಯಿಂದ ಕಂಡುಬಂದಿರುವುದನ್ನೇ ದೃಢಪಡಿಸಿವೆ. (ಬಾಕ್ಸ್ 2)

**ಬಾಕ್ಸ್ 2**
**ಆನ್‌ಲೈನ್ ತರಗತಿಗಳ ಬಗ್ಗೆ ಶಿಕ್ಷಕರ ಪ್ರತಿಕ್ರಿಯೆಗಳು**

*"45 ನಿಮಿಷಗಳ ಒಂದು ತರಗತಿಯಲ್ಲಿ ಅರ್ಧ ಸಮಯ ಹಾಯ್, ಹಲೋ ಹೇಳುವುದರಲ್ಲೇ ಮುಗಿಯುತ್ತದೆ. ಏಕೆಂದರೆ ನೆಟ್‌ವರ್ಕ್ ಸರಿಯಾಗಿ ಸಿಗದ ಕಾರಣ ಮಕ್ಕಳಿಗೆ ಕೇಳಿಸಿಕೊಳ್ಳುವುದೇ ಸಮಸ್ಯೆಯಾಗಿರುತ್ತದೆ. "ಮೇಡಂ, ಸರಿಯಾಗಿ ಕೇಳಿಸುವುದಿಲ್ಲ" ಎನ್ನುತ್ತಲೇ ಇರುತ್ತಾರೆ. ನನ್ನ ಆನ್‌ಲೈನ್ ತರಗತಿಗೆ ಹಾಜರಾಗುವುದು ನಾಲ್ಕು ಹುಡುಗಿಯರು ಮಾತ್ರ. ಅವರಿಗೇ ಪಾಠ ಮಾಡುವುದು ತುಂಬಾ ಕಷ್ಟ, ಇನ್ನು ಎಲ್ಲಾ ಮಕ್ಕಳೂ ಆನ್‌ಲೈನ್ ತರಗತಿಗೆ ಸೇರಿದ್ದಾದರೆ ಹೇಗೆ ಪಾಠ ಮಾಡುವುದೋ ಗೊತ್ತಿಲ್ಲ."*
– ಶಿಕ್ಷಕರು, ರಾಯ್‌ಪುರ್, ಛತ್ತೀಸ್‌ಘಢ್.

*"ಹಾಜರಾತಿಯೇ ದೊಡ್ಡ ಸಮಸ್ಯೆ. 14 ಮಕ್ಕಳಲ್ಲಿ ಕೇವಲ 4 ಮಕ್ಕಳಿಗೆ ಮಾತ್ರ ಆನ್ ಲೈನ್ ತರಗತಿಗಳಿಗೆ ಹಾಜರಾಗುವುದು ಸಾಧ್ಯವಾಗುತ್ತಿದೆ. ನೆಟ್ ವರ್ಕ್ ಸಮಸ್ಯೆಯು ಹಾಜರಾತಿಯ ಮೇಲೆ ಪರಿಣಾಮ ಬೀರುತ್ತಿದೆ. ಇದು ಸಾಮಾನ್ಯ ಸ್ಥಿತಿಯಂತೆ ಅಲ್ಲವೇ ಅಲ್ಲ."*
– ಶಿಕ್ಷಕರು, ಧಮ್‌ತರಿ, ಛತ್ತೀಸ್‌ಘಢ್

*"ಶೇಕಡ 20ರಷ್ಟು ಪೋಷಕರಲ್ಲಿ ಮಾತ್ರ ಸ್ಮಾರ್ಟ್‌ಫೋನ್ ಇದೆ. ಅವರಲ್ಲಿ ಬಹುತೇಕರು ಕಾರ್ಮಿಕರು. ಇವರೆಲ್ಲ ಬೆಳಿಗ್ಗೆ ಹೋಗಿ ಸಂಜೆ ಮನೆಗೆ ವಾಪಸಾಗುವುದರಿಂದ ಮಕ್ಕಳಿಗೆ ತರಗತಿಗೆ ಹಾಜರಾಗುವುದೂ ಕಷ್ಟವೇ. ಸ್ಮಾರ್ಟ್‌ಫೋನ್ ಇರುವವರೂ ಮಕ್ಕಳ ಕೈಯಲ್ಲಿ ಫೋನ್ ಕೊಟ್ಟರೆ ಹಾಳಾಗುತ್ತಾರೆ ಎಂದು ತಮ್ಮ ಮಕ್ಕಳಿಗೆ ಫೋನ್ ಕೊಡಲು ಬಯಸುತ್ತಿಲ್ಲ. ಅದರೊಂದಿಗೆ ನೆಟ್ ಸಂಪರ್ಕವೂ ಸರಿಯಾಗಿ ಸಿಗದು, ನಾನೀಗ ನಿಮ್ಮೊಡನೆ ಮಾತನಾಡಲು ಮನೆಯಿಂದಾಚೆ ಬಂದಿದ್ದೇನೆ ಮತ್ತು ಅನೇಕ ಪೋಷಕರು ತುಂಬಾ ಬಡವರು, ಅವರಿಗೆ ಸ್ಮಾರ್ಟ್‌ಫೋನ್ ಕೊಂಡುಕೊಳ್ಳುವ ಸಾಮರ್ಥ್ಯವಿಲ್ಲ."*
– ಶಿಕ್ಷಕರು, ಟೋಂಕ್, ರಾಜಸ್ಥಾನ

## 2.2 ನಿಜವಾದ ಅರ್ಥದಲ್ಲಿ ಶಿಕ್ಷಣ ನೀಡಲು ಆನ್‌ಲೈನ್ ತರಗತಿಗಳಿಗೆ ಸಾಧ್ಯವಾಗುತ್ತಿಲ್ಲ

ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ಮತ್ತು ಜಾರಿಯಾಗಿರದ ಎರಡೂ ರಾಜ್ಯಗಳ ಶಿಕ್ಷಕರ ಮುಖ್ಯ ಕಳಕಳಿಯೆಂದರೆ, ಅವರಿಗೆ ಮಕ್ಕಳೊಡನೆ ಭಾವನಾತ್ಮಕ ಸಂಬಂಧ ಸಾಧ್ಯವಾಗದಿರುವುದು(ಕೋಷ್ಟಕ 3). ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳ ಶೇಕಡ 84ರಷ್ಟು ಶಿಕ್ಷಕರು ಈ ತರಗತಿಗಳಲ್ಲಿ ಮಕ್ಕಳೊಡನೆ ಭಾವನಾತ್ಮಕ ಸಂಬಂಧ ಇಟ್ಟುಕೊಳ್ಳುವುದು ಅಸಾಧ್ಯವಾಗಿದೆ ಎಂದು ಹೇಳಿದ್ದಾರೆ. ಆನ್‌ಲೈನ್ ಶಿಕ್ಷಣ ಜಾರಿಯಾಗದ ರಾಜ್ಯಗಳ ಶೇಕಡ 89ರಷ್ಟು ಶಿಕ್ಷಕರೂ ಇದೇ ರೀತಿಯ ಕಳಕಳಿ ವ್ಯಕ್ತಪಡಿಸಿದ್ದಾರೆ.

**ಕೋಷ್ಟಕ 3: ಆನ್‌ಲೈನ್ ತರಗತಿಗಳಲ್ಲಿ ಮಕ್ಕಳೊಡನೆ ಭಾವನಾತ್ಮಕ ಸಂಪರ್ಕ**

| | ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿ | | ಆನ್‌ಲೈನ್ ಶಿಕ್ಷಣ ಜಾರಿಯಾಗದ ರಾಜ್ಯಗಳಲ್ಲಿ | | ಒಟ್ಟು | |
|---|---|---|---|---|---|---|
| | ಸಂಖ್ಯೆ | % | ಸಂಖ್ಯೆ | % | ಸಂಖ್ಯೆ | % |
| ಭಾವನಾತ್ಮಕ ಸಂಬಂಧ ಇಟ್ಟುಕೊಳ್ಳುವುದು ಸುಲಭವಾಗಿದೆ | 102 | 16 | 102 | 11 | 204 | 13 |
| ಭಾವನಾತ್ಮಕ ಸಂಬಂಧ ಇಟ್ಟುಕೊಳ್ಳುವುದು ಕಷ್ಟ ಅಥವಾ ಅಸಾಧ್ಯ | 532 | 84 | 786 | 89 | 1,318 | 87 |

ಆನ್‌ಲೈನ್ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕೇಳಲಾದ ಮುಕ್ತ ಪ್ರಶ್ನೆಗಳಿಗೆ ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿನ ಶಿಕ್ಷಕರು ಪ್ರಶ್ನಾವಳಿಯ ಸಮೀಕ್ಷೆಯಲ್ಲಿನ ಕಳವಳಗಳೇ ವ್ಯಕ್ತವಾದವು. (ಬಾಕ್ಸ್ 3)

**ಬಾಕ್ಸ್ 3: ಆನ್‌ಲೈನ್ ಶಿಕ್ಷಣದಲ್ಲಿ ಬೋಧನೆ–ಕಲಿಕೆಯ ಪರಿಣಾಮ ಕುರಿತಂತೆ ಶಿಕ್ಷಕರ ಪ್ರತಿಕ್ರಿಯೆಗಳು**

"ಇದು ಬಹುತೇಕ ಏಕಮುಖಿ ಸಂವಹನ; ನಾವು ಪಿಪಿಟಿಯಲ್ಲಿ ಚಿತ್ರ, ವಿಡಿಯೊಗಳನ್ನು ತೋರಿಸುತ್ತೇವೆ. ಆದರೆ ಮಕ್ಕಳು ಇದನ್ನು ಅರ್ಥಮಾಡಿಕೊಂಡರೋ ಇಲ್ಲವೋ ಎಂದು ಪರೀಕ್ಷಿಸುವುದು ತುಂಬಾ ಕಷ್ಟ. ಜೊತೆಗೆ ಬಹುತೇಕ ಮಕ್ಕಳು ಈ ಆನ್‌ಲೈನ್ ತರಗತಿಗೆ ಹಾಜರಾಗುತ್ತಿಲ್ಲ. ಅವರಿಗೆ ಏನು ಮಾಡುವುದೋ ಗೊತ್ತಿಲ್ಲ. ನಾವು ಓದಲು, ಬರೆಯಲು ವಾಟ್ಸಾಪ್ ಮೂಲಕ ಕೆಲವು ಹೋಂವರ್ಕ್ ಕೊಡುತ್ತೇವೆ. ಕೆಲವು ಮಕ್ಕಳು ಅದನ್ನು ಮಾಡಿ ಕಳುಹಿಸುತ್ತಾರೆ ಕೂಡ. ಈಗ ಅನೇಕ ಮಕ್ಕಳ ಬಳಿ ಪಠ್ಯಪುಸ್ತಕಗಳೂ ಇಲ್ಲ, ಕೆಲವು ಮಕ್ಕಳು ತಮ್ಮ ಹಿರಿಯ ಸೋದರ ಸೋದರಿಯರ ಪುಸ್ತಕ ಬಳಸುತ್ತಾರೆ, ಕೆಲವರು ಪಕ್ಕದ ಮನೆಯ ಮಕ್ಕಳಿಂದ ಪಡೆದುಕೊಂಡಿದ್ದಾರೆ".

– ಶಿಕ್ಷಕರು, ರಾಯ್‌ಪುರ್, ಛತ್ತೀಸ್‌ಘಢ್.

"ನಾನು ಗಣಿತದ ಅಭ್ಯಾಸ ಸಾಮಗ್ರಿಗಳನ್ನು ಕಳುಹಿಸುತ್ತೇನೆ. ಗಣಿತದಲ್ಲಿ ಪರಿಕಲ್ಪನೆಗಳ ಮೇಲಿನ ವೀಡಿಯೋಗಳನ್ನು ನೋಡುವುದೇನೋ ಸರಿಯೇ, ಆದರೆ ಗಣಿತದಲ್ಲಿ ಅಭ್ಯಾಸಗಳನ್ನು ಮಾಡುವುದು ಬಹಳ ಮುಖ್ಯ. ಮಕ್ಕಳು ವೀಡಿಯೋ ನೋಡುತ್ತಾರೆ, ಆದರೆ ಅಭ್ಯಾಸ ಮಾಡುವುದಿಲ್ಲ. ಹೀಗೆ ಚಟುವಟಿಕೆ ಮತ್ತು ಅಭ್ಯಾಸದಲ್ಲಿ ತೊಡಗಲು ಮಕ್ಕಳ ಜೊತೆಯಲ್ಲಿ ಒಬ್ಬರು ಶಿಕ್ಷಕರಿರಬೇಕು."

– ಶಿಕ್ಷಕರು, ಟೋಂಕ್, ರಾಜಸ್ಥಾನ

"ಪ್ರತಿಯೊಂದು ಮಗುವೂ ವಿಭಿನ್ನವಾಗಿದೆ. ನನ್ನ ತರಗತಿಯಲ್ಲಿ ಮೂರು ಮಕ್ಕಳು ಮೂರು ವಿಭಿನ್ನ ಆಸಕ್ತಿಗಳನ್ನು ಹೊಂದಿದ್ದರೆ ಆಗ ನಾನವರನ್ನು ಅವರ ಆಸಕ್ತಿಗೆ ತಕ್ಕಂತೆ ಹುರಿದುಂಬಿಸುತ್ತೇನೆ. ನಾವು ಅವರಿಗೆ ಚಟುವಟಿಕೆಗಳ ಮೂಲಕ ಕಲಿಸಬೇಕು. ನಾನದನ್ನು ಫೋನಿನ ಮೂಲಕ ಮಾಡುವುದಾದರೂ ಹೇಗೆ? ವೀಡಿಯೋದಲ್ಲಿ ಬಳಕೆಯಾಗಿರುವ ಭಾಷೆಗೂ ನಾವು ಶಿಕ್ಷಕರು ಬಳಸುವ ಭಾಷೆಗೂ ಬಹಳ ವ್ಯತ್ಯಾಸವಿದೆ. ಅವರು (ಮಕ್ಕಳು ಮತ್ತು ಪೋಷಕರು) ಅಂತಹ ಭಾಷೆಯನ್ನು ಅರ್ಥಮಾಡಿಕೊಳ್ಳಲಾರರು. ನಾವು ರಾಜ್ಯ ಶಿಕ್ಷಣ ಇಲಾಖೆಯ ಕೇಂದ್ರ ಕಛೇರಿಯಿಂದ ಪಠ್ಯದ ವಿಷಯವನ್ನು ಪಡೆಯುತ್ತೇವೆ. ಅವನ್ನು ನಾವು ಮಕ್ಕಳಿಗೆ ತಲುಪಿಸಬೇಕು. ನಮ್ಮ ಮಕ್ಕಳಿಗೆ ನಾವೇ ಸಂಪನ್ಮೂಲ ಸಾಹಿತ್ಯವನ್ನು ತಯಾರಿಸುವುದಿಲ್ಲ. ಎಲ್ಲೋ

ಕುಳಿತಿರುವವರು ನಮ್ಮ ಮಕ್ಕಳಿಗೆ ಹೇಗೆ ವಿಷಯಗಳನ್ನು ರೂಪಿಸಬಲ್ಲರು? ಅವರು ತಯಾರಿಸಿದ (ಆನ್‌ಲೈನ್) ಸಾಮಗ್ರಿಗಳು ವಸ್ತುವಿಷಯಗಳು ನಮ್ಮ ಮಕ್ಕಳ ಸಂದರ್ಭಕ್ಕೆ ಸಂಪೂರ್ಣ ಭಿನ್ನವಾಗಿರುತ್ತವೆ."

– ಶಿಕ್ಷಕರು, ಬಾಡ್ಮೇರ್, ರಾಜಸ್ಥಾನ

ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳ ಶೇಕಡ 90ರಷ್ಟು ಶಿಕ್ಷಕರು (ಬೇಸ್=634) ಆನ್‌ಲೈನ್ ತರಗತಿಗಳಲ್ಲಿ ಮಕ್ಕಳ ಕಲಿಕೆಯನ್ನು ಅರ್ಥಪೂರ್ಣವಾಗಿ ಮೌಲ್ಯಮಾಪನ ಮಾಡಲಾಗುತ್ತಿಲ್ಲವೆಂದು ಹೇಳುತ್ತಾರೆ. ಉಳಿದ ಶೇಕಡ 10ರಷ್ಟು ಶಿಕ್ಷಕರಲ್ಲಿ ಅರ್ಧದಷ್ಟು ಶಿಕ್ಷಕರು ಮಕ್ಕಳ ಅರ್ಥಪೂರ್ಣ ಮೌಲ್ಯಮಾಪನ ತುಂಬಾ ಕಷ್ಟವೆಂದು ಒಪ್ಪಿಕೊಳ್ಳುತ್ತಾರೆ.

ಆನ್‌ಲೈನ್ ತರಗತಿಗಳಲ್ಲಿ ಮಕ್ಕಳಿಗೆ  ಹೋಂವರ್ಕ್ ಕೊಡುವಿರಾ ಎಂದು ಶಿಕ್ಷಕರನ್ನು ಕೇಳಲಾಯಿತು. ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳ ಶೇಕಡ 17ರಷ್ಟು (ಬೇಸ್=548) ಶಿಕ್ಷಕರು ಯಾವುದೇ ಹೋಂವರ್ಕ್ ಕೊಟ್ಟಿರಲಿಲ್ಲ. ಹೋಂವರ್ಕ್ ಕೊಟ್ಟಂತ ಸುಮಾರು ಶೇಕಡ 44ರಷ್ಟು(456 ಶಿಕ್ಷಕರಲ್ಲಿ) ಶಿಕ್ಷಕರು ಮಕ್ಕಳು ಹೋಂವರ್ಕ್ ಮಾಡಲಾಗಲಿಲ್ಲ ಎಂದರು.

ಪೋಷಕರನ್ನು ಸಮೀಕ್ಷೆಗೆ ಒಳಪಡಿಸಿದಾಗ ಅವರ ಕಾಳಜಿಗಳೂ ಮೇಲೆ ಹೇಳಿದ ಶಿಕ್ಷಕರ ಅಭಿಪ್ರಾಯವನ್ನೇ ಪ್ರಕಟಪಡಿಸಿದ್ದು ಕಂಡುಬರುತ್ತದೆ. ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳ ಶೇಕಡ 36ರಷ್ಟು ಪೋಷಕರು (ಬೇಸ್=126) ತಮ್ಮ ಮಕ್ಕಳು ಸ್ವತಃ ಅವರಾಗಿಯೇ ಆನ್‌ಲೈನ್ ಆ್ಯಪ್ ಉಪಯೋಗಿಸಲಾರರು ಎಂದು ಹೇಳುತ್ತಾರೆ.

ಆನ್‌ಲೈನ್ ತರಗತಿಗಳು ಅವರ ಮಕ್ಕಳಿಗೆ ಸೂಕ್ತವಾಗಿವೆಯೇ ಎಂದು ಪೋಷಕರನ್ನು ಕೇಳಲಾಯಿತು. ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳ ಶೇಕಡ 70ರಷ್ಟು ಪೋಷಕರು ಆನ್‌ಲೈನ್ ತರಗತಿಗಳು ತಮ್ಮ ಮಕ್ಕಳಿಗೆ ಸೂಕ್ತವಾಗಿಲ್ಲವೆಂದು ಭಾವಿಸುತ್ತಾರೆ. ಹಾಗೆಯೇ ಆನ್‌ಲೈನ್ ಶಿಕ್ಷಣ ಜಾರಿಯಾಗಿರದ ರಾಜ್ಯಗಳ ಶೇಕಡ 50ರಷ್ಟು ಪೋಷಕರು ಈ ಶಿಕ್ಷಣ ಕ್ರಮ ಅವರ ಮಕ್ಕಳಿಗೆ ಸೂಕ್ತವಾಗಿ ಕಾಣುವುದಿಲ್ಲವೆಂದು ಹೇಳಿದ್ದಾರೆ (ಕೋಷ್ಟಕ 4).

**ಕೋಷ್ಟಕ 4: ಆನ್‌ಲೈನ್ ತರಗತಿಗಳ ಸೂಕ್ತತೆ**

| | ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿ | | ಆನ್‌ಲೈನ್ ಶಿಕ್ಷಣ ಜಾರಿಯಾಗಿರದ ರಾಜ್ಯಗಳಲ್ಲಿ | | ಒಟ್ಟು | |
|---|---|---|---|---|---|---|
| | ಸಂಖ್ಯೆ | % | ಸಂಖ್ಯೆ | % | ಸಂಖ್ಯೆ | % |
| ಮಕ್ಕಳಿಗೆ ಆನ್‌ಲೈನ್ ತರಗತಿಗಳು ಸೂಕ್ತ | 42 | 31 | 78 | 46 | 120 | 39 |
| ಮಕ್ಕಳಿಗೆ ಆನ್‌ಲೈನ್ ತರಗತಿಗಳು ಸೂಕ್ತವಲ್ಲ | 93 | 69 | 93 | 54 | 186 | 61 |

## 2.3 ಆನ್‌ಲೈನ್ ಕಲಿಕೆಯ ವೇದಿಕೆಗಳನ್ನು ಬಳಸಲು ಶಿಕ್ಷಕರು ಸಮರ್ಪಕವಾಗಿ ಸಿದ್ಧರಾಗಿಲ್ಲ

ನಮ್ಮ ಸಾರ್ವಜನಿಕ ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿ ಆನ್‌ಲೈನ್ ಕಲಿಕಾ ವೇದಿಕೆಗಳನ್ನು ಮತ್ತು ಬೋಧನಾ ವಿಧಾನಗಳನ್ನು ಬಳಸುವುದು ರೂಢಿಗೆ ಬಂದಿಲ್ಲ. ಅರ್ಧಕ್ಕೂ ಹೆಚ್ಚು ಶಿಕ್ಷಕರು (ಒಟ್ಟಾಗಿ ಶೇಕಡ 54) ತಮಗೆ ಆನ್‌ಲೈನ್ ವೇದಿಕೆ ಮತ್ತು ಬೋಧನೆಯ ವಿಧಾನಗಳನ್ನು ಸೂಕ್ತವಾಗಿ ಬಳಸುವ ಅನುಭವವಿಲ್ಲ ಮತ್ತು ಆ ಬಗ್ಗೆ ಸಾಕಷ್ಟು ತಿಳಿವಳಿಕೆಯೂ ಇಲ್ಲ ಎಂಬುದನ್ನು ಹಂಚಿಕೊಂಡಿದ್ದಾರೆ (ಕೋಷ್ಟಕ 5).

**ಕೋಷ್ಟಕ 5: ಶಿಕ್ಷಕರ ಆನ್‌ಲೈನ್ ಬೋಧನೆ-ಕಲಿಕೆಯ ಜ್ಞಾನ**

| | ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿ | | ಆನ್‌ಲೈನ್ ಶಿಕ್ಷಣ ಜಾರಿಯಾಗಿರದ ರಾಜ್ಯಗಳಲ್ಲಿ | | ಒಟ್ಟು | |
|---|---|---|---|---|---|---|
| | ಸಂಖ್ಯೆ | % | ಸಂಖ್ಯೆ | % | ಸಂಖ್ಯೆ | % |
| ಆನ್‌ಲೈನ್ ಬಳಸಲು ಸಾಕಷ್ಟು ಜ್ಞಾನವಿಲ್ಲದಿರುವವರು | 334 | 53 | 493 | 56 | 827 | 54 |
| ಆನ್‌ಲೈನ್ ಬಳಸಲು ಸಾಕಷ್ಟು ಜ್ಞಾನ ಹೊಂದಿರುವವರು | 300 | 47 | 395 | 44 | 695 | 46 |

## 2.4 ಆನ್‌ಲೈನ್ ಬೋಧನಾ ಪ್ರಕ್ರಿಯೆಗಳು

ಶಿಕ್ಷಕರೊಂದಿಗೆ ನಡೆಸಿದ ಸಮೀಕ್ಷೆಯು ಸಮೀಕ್ಷೆಯಲ್ಲಿ ಕಂಡುಬಂದಂತೆ ಆನ್‌ಲೈನ್ ತರಗತಿಗಳಲ್ಲಿ ತೊಡಗಿಸಿಕೊಳ್ಳುವಿಕೆ ಅತ್ಯಂತ ಕನಿಷ್ಠ ಮಟ್ಟದಲ್ಲಿದೆ ಎಂಬುದನ್ನು ತೋರಿಸುತ್ತದೆ. ಕೇವಲ ಶೇಕಡ 50ರಷ್ಟು ಶಿಕ್ಷಕರು ದಿನವೂ ಮಕ್ಕಳಿಗೆ ತರಗತಿಗಳನ್ನು ತೆಗೆದುಕೊಂಡರೆ, ಉಳಿದವರು ಕಡಿಮೆ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದಾರೆ. (ಕೋಷ್ಟಕ 6)

**ಕೋಷ್ಟಕ 6: ಆನ್‌ಲೈನ್ ತರಗತಿಗಳ ಪ್ರಮಾಣ**

| | ಶಿಕ್ಷಕರು(%) | ಪೋಷಕರು(%) |
|---|---|---|
| ಪ್ರತಿದಿನ | 49 | 49 |
| ದಿನ ಬಿಟ್ಟು ದಿನ | 17 | 17 |
| ವಾರಕ್ಕೆರಡು ಸಲ | 14 | 6 |
| ವಾರಕ್ಕೊಂದು ಸಲ | 12 | 0 |
| ಹದಿನೈದು ದಿನಕ್ಕೊಂದು ಸಲ | 2 | 4 |
| ನಿಗದಿತ ಸಮಯವಿಲ್ಲ | 7 | 25 |

ಶಿಕ್ಷಕರೊಂದಿಗೆ ನಡೆಸಿದ ಸಮೀಕ್ಷೆಯಿಂದ ಸುಮಾರು ಶೇಕಡ 75ರಷ್ಟು ಶಿಕ್ಷಕರು, ಯಾವುದೇ ತರಗತಿಗೆ(ಗ್ರೇಡ್), ಸರಾಸರಿ ಒಂದು ಗಂಟೆಗೂ ಕಡಿಮೆ ಅವಧಿಯ ಆನ್‌ಲೈನ್ ತರಗತಿಗಳನ್ನು ತೆಗೆದುಕೊಳ್ಳುತ್ತಾರೆ ಎಂಬುದು ಕೂಡ ತಿಳಿದುಬಂತು. ಸರಾಸರಿ ಶೇಕಡ 80ರಷ್ಟು ಸಂದರ್ಭಗಳಲ್ಲಿ ದಿನಕ್ಕೆ ಕೇವಲ ಒಂದು ಗಂಟೆ ಸಮಯ ಮಾತ್ರ ಶಿಕ್ಷಕರು ಆನ್‌ಲೈನ್ ತರಗತಿಯಲ್ಲಿ ಕಳೆಯುತ್ತಾರೆ ಎಂಬುದು ಶಿಕ್ಷಕರು ಮತ್ತು ಪೋಷಕರಿಬ್ಬರ ಪ್ರತಿಕ್ರಿಯೆಯಲ್ಲಿ ಕಂಡುಬಂದಿದೆ.

**ಕೋಷ್ಟಕ 7: ಒಂದು ತರಗತಿಗೆ (ಗ್ರೇಡ್) ತೆಗೆದುಕೊಂಡ ಆನ್‌ಲೈನ್ ತರಗತಿಗಳ ಸರಾಸರಿ ಸಮಯ**

| | ಶಿಕ್ಷಕರು(%) | ಪೋಷಕರು(%) |
|---|---|---|
| ದಿನಕ್ಕೆ ಒಂದು ಗಂಟೆಗೂ ಕಡಿಮೆ | 74 | 20 |
| ದಿನಕ್ಕೆ ಒಂದು ಗಂಟೆ | 24 | 64 |
| ದಿನಕ್ಕೆ ಒಂದು ಗಂಟೆಗೂ ಹೆಚ್ಚು | 2 | 16 |

ಆನ್‌ಲೈನ್ ಶಿಕ್ಷಣವನ್ನು ಜಾರಿಮಾಡಿರುವ ಕೆಲವು ರಾಜ್ಯಗಳಲ್ಲಿ ಸಾಕಷ್ಟು ಗಮನಾರ್ಹ ಸಂಖ್ಯೆಯ ಶಿಕ್ಷಕರು (ಶೇಕಡ 24%) ತಾವು ಯಾವುದೇ ಬೋಧನಾ ಕಲಿಕೆಯ ಸಾಮಗ್ರಿಗಳನ್ನು ಆನ್‌ಲೈನ್ ತರಗತಿಗಳಲ್ಲಿ ನೀಡುತ್ತಿಲ್ಲವೆಂದು ಹೇಳಿದ್ದಾರೆ. ಶೇಕಡ 24ರಷ್ಟು ಶಿಕ್ಷಕರು ಅಂತಹ ಸಾಮಗ್ರಿಗಳನ್ನು ತರಗತಿಯ ಅವಧಿಯಲ್ಲಿ ಕೊಡುವುದಾಗಿ ಪ್ರತಿಕ್ರಿಯಿಸಿದ್ದಾರೆ. ಇದರ ಫಲವಾಗಿ ಆನ್‌ಲೈನ್ ತರಗತಿಗೆ ಮೊದಲು ಮಕ್ಕಳು ಬೋಧನೆ ಕಲಿಕೆಗೆ ಸಂಬಂಧಪಟ್ಟ ಯಾವುದೇ ಸಾಮಗ್ರಿಗಳು ಲಭ್ಯವಾಗುತ್ತಿಲ್ಲ.

ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿ, ಕಲಿಕೆಗೆ ಸಂಬಂಧಪಟ್ಟ ಆನ್‌ಲೈನ್ ಸಾಮಗ್ರಿಗಳನ್ನು ಹಂಚಿಕೊಳ್ಳಲು ಶೇಕಡ 71ರಷ್ಟು ಶಿಕ್ಷಕರು ವಾಟ್ಸಾಪ್ ಬಳಸುತ್ತಿದ್ದಾರೆ. ಶೇಕಡ 14ರಷ್ಟು ಶಿಕ್ಷಕರು ಎಂಎಸ್ ಟೀಮ್ಸ್, ಝೂಮ್, ಮತ್ತು ವೆಬೆಕ್ಸ್ ನಂತಹ ಇತರೇ ಆ್ಯಪ್‌ಗಳನ್ನು ಉಪಯೋಗಿಸುತ್ತಿದ್ದಾರೆ.

## 2.5 ಶಾಲೆಗಳು ಪುನಃ ಪ್ರಾರಂಭವಾದಾಗ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಪೋಷಕರು ಇಚ್ಛೆ ವ್ಯಕ್ತಪಡಿಸಿದ್ದಾರೆ.

ಪೋಷಕರ ಸಮೀಕ್ಷೆಯಲ್ಲಿ, ಸಾಕಷ್ಟು ಸುರಕ್ಷತಾ ಕ್ರಮಗಳೊಂದಿಗೆ ಶಾಲೆಗಳನ್ನು ತೆರೆದರೆ, ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಪೋಷಕರು ಒಲವು ಹೊಂದಿದ್ದಾರೆಯೇ? ಎಂದು ಕೇಳಲಾಗಿತ್ತು. ಪ್ರಚಲಿತ ನಂಬಿಕೆಗೆ ವಿರುದ್ಧವಾಗಿ ಹೆಚ್ಚೂ ಕಡಿಮೆ ಎಲ್ಲಾ ಪೋಷಕರೂ, ಅಂದರೆ ಶೇಕಡ 90ರಷ್ಟು ಪೋಷಕರು, ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತೇವೆ ಎಂದರು. (ಕೋಷ್ಟಕ 8).

**ಕೋಷ್ಟಕ 8: ಶಾಲೆಗಳು ಪುನಃ ಪ್ರಾರಂಭವಾದಾಗ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಇಚ್ಛೆ ವ್ಯಕ್ತಪಡಿಸಿರುವ ಪೋಷಕರು**

| | ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿ | | ಆನ್‌ಲೈನ್ ಶಿಕ್ಷಣ ಜಾರಿಯಾಗಿರದ ರಾಜ್ಯಗಳಲ್ಲಿ | | ಒಟ್ಟು | |
|---|---|---|---|---|---|---|
| | ಸಂಖ್ಯೆ | % | ಸಂಖ್ಯೆ | % | ಸಂಖ್ಯೆ | % |
| ಇಲ್ಲ | 2 | 1 | 30 | 18 | 32 | 10 |
| ಹೌದು | 133 | 99 | 141 | 82 | 274 | 90 |

ಈ ಮೇಲಿನ ಅಭಿಪ್ರಾಯವನ್ನೇ ಅನುಮೋದಿಸುವಂತೆ, ಶೇಕಡ 66ರಷ್ಟು ಪೋಷಕರು ಶಾಲೆಗಳನ್ನು ತೆರೆಯುವುದರಿಂದ ಮಕ್ಕಳ ಆರೋಗ್ಯಕ್ಕೆ ಯಾವುದೇ ತೊಂದರೆಯಾಗುವುದಿಲ್ಲವೆಂದೂ ಕೂಡ ಹೇಳಿದ್ದಾರೆ (ಕೋಷ್ಟಕ 9).

**ಕೋಷ್ಟಕ 9: ಶಾಲೆಗಳು ಪುನರಾರಂಭಗೊಂಡಾಗ ಅವುಗಳ ಸುರಕ್ಷತೆಯ ಬಗ್ಗೆ ಪೋಷಕರ ಅಭಿಪ್ರಾಯ**

| | ಆನ್‌ಲೈನ್ ಶಿಕ್ಷಣ ಜಾರಿಯಾಗಿರುವ ರಾಜ್ಯಗಳಲ್ಲಿ | | ಆನ್‌ಲೈನ್ ಶಿಕ್ಷಣ ಜಾರಿಯಾಗಿರದ ರಾಜ್ಯಗಳಲ್ಲಿ | | ಒಟ್ಟು | |
|---|---|---|---|---|---|---|
| | ಸಂಖ್ಯೆ | % | ಸಂಖ್ಯೆ | % | ಸಂಖ್ಯೆ | % |
| ಇಲ್ಲ | 44 | 38 | 42 | 30 | 86 | 34 |
| ಹೌದು | 71 | 62 | 98 | 70 | 169 | 66 |

# ೩. ಉಪಸಂಹಾರ

ಕೋವಿಡ್ 19 ಪಿಡುಗಿನ ಈ ಸಂದರ್ಭದಲ್ಲಿ, ನಮ್ಮ ದೇಶ ಮತ್ತು ವಿಶ್ವದ ಇತರೆಡೆ ಕೈಗೊಳ್ಳಲಾದ ಅಧ್ಯಯನಗಳು, ಶಾಲಾ ಶಿಕ್ಷಣದಲ್ಲಿ ಉಂಟಾದ ಸದ್ಯದ ಸವಾಲುಗಳನ್ನು ಎದುರಿಸಲು ಮಾಹಿತಿ ಮತ್ತು ಸಂವಹನ ತಂತ್ರಜ್ಞಾನವನ್ನು ವಿವೇಚನೆಯಿಲ್ಲದೆ ಬಳಸುವುದರಿಂದ ಅಸಮಾನತೆಗಳು ಹೆಚ್ಚಾಗಬಹುದು ಎನ್ನುವುದನ್ನು ಒತ್ತಿ ಹೇಳಿವೆ. ಮೂಲ ಶಾಲಾ ಶಿಕ್ಷಣದ ಅವಕಾಶಗಳನ್ನು ಪಡೆದುಕೊಳ್ಳುವಲ್ಲಿಯೇ ಅಸಮಾನತೆಗಳು ಇರುವಾಗ ಹಾಗೂ ಇದರ ಹಿನ್ನೆಲೆಯಲ್ಲಿ ಸಾಮಾಜಿಕ–ಆರ್ಥಿಕ ವ್ಯತ್ಯಾಸಗಳು ಬೇರೂರಿರುವಾಗ ಇದೇನು ಅಂತಹ ಆಶ್ಚರ್ಯಕರ ವಿಷಯವಲ್ಲ. ಈ ಬಗೆಯ ವ್ಯತ್ಯಾಸಗಳು ಆನ್‌ಲೈನ್ ಶಿಕ್ಷಣ ಇನ್ನಷ್ಟು ಹೆಚ್ಚಾಗುವ ಸಾಧ್ಯತೆ ಇದೆ.

ಈ ಅಧ್ಯಯನವು, ಒಟ್ಟಾರೆಯಾಗಿ, ಇತ್ತೀಚೆಗೆ ಕೈಗೊಳ್ಳಲಾದ ಇದೇ ರೀತಿಯ ಇನ್ನಿತರ ಅಧ್ಯಯನಗಳ ಜೊತೆ ಸಹಮತ ಹೊಂದಿದೆ ಮತ್ತು ವಿವಿಧ ರಾಜ್ಯಗಳ ಸರ್ಕಾರಿ ಶಾಲೆಯ ಮಕ್ಕಳಿಗೆ ಪರ್ಯಾಯವಾಗಿ ಯೋಜಿಸಲಾದ ಆನ್‌ಲೈನ್ ಶಿಕ್ಷಣದ ಪರಿಹಾರೋಪಾಯ ಗಂಭೀರ ಸ್ವರೂಪದ ಸಮಸ್ಯೆಗಳಿಗೆ ಕಾರಣವಾಗುವುದನ್ನು ಒತ್ತಿ ಹೇಳುತ್ತದೆ. ಕಾರಣಗಳೆಂದರೆ, ಆರ್ಥಿಕವಾಗಿ ಹಿಂದುಳಿದ ಕುಟುಂಬಗಳು ಮತ್ತು ಮಕ್ಕಳಿಗೆ ಆನ್‌ಲೈನ್ ತರಗತಿಗಳನ್ನು ಪಡೆದುಕೊಳ್ಳುವ ಸಾಧ್ಯತೆಯೇ ಇಲ್ಲದಿರುವುದು; ಕಲಿಕೆ ಪ್ರಕ್ರಿಯೆಯು ಮಕ್ಕಳಿಗೆ ಸಾಕಷ್ಟು ಕಲಿಕೆಯ ಅವಕಾಶಗಳನ್ನು ಒದಗಿಸದಿರುವುದು, ಹಾಗೂ ಆನ್‌ಲೈನ್ ಬೋಧನೆಗೆ ಸಾಕಷ್ಟು ಪೂರ್ವಸಿದ್ಧತೆಯಿಲ್ಲದ ಶಿಕ್ಷಕರು, ಮುಂತಾದ ಕಾರಣಗಳಿಂದಾಗಿ ಆನ್‌ಲೈನ್ ಶಿಕ್ಷಣ ಸೂಕ್ತ ಪರ್ಯಾಯ ಮಾರ್ಗವಾಗಿಲ್ಲ. ಈ ಪಿಡುಗಿನ ಆರಂಭದಲ್ಲಿ ಆನ್‌ಲೈನ್ ಪರ್ಯಾಯ ಶಿಕ್ಷಣ ಮಾರ್ಗವನ್ನು ಆಯ್ಕೆ ಮಾಡಿಕೊಂಡ ರಾಜ್ಯಗಳು ಕನಿಷ್ಠ ಮಟ್ಟದ ತಯಾರಿಯೊಂದಿಗೆ ಪ್ರಾರಂಭಿಸಿದ್ದನ್ನೂ ಈ ಅಧ್ಯಯನವು ಹೇಳುತ್ತದೆ. ಅದೃಷ್ಟವಶಾತ್, ಈ ರೀತಿಯ ಹಲವು ಆರಂಭಿಕ ಪ್ರಯತ್ನಗಳನ್ನು ಹಿಂಪಡೆಯಲಾಗಿದೆ. ಹಾಗೆಯೇ ರಾಜ್ಯಗಳ ಶಿಕ್ಷಣ ಇಲಾಖೆಗಳು ಈಗ ಹೆಚ್ಚೆಚ್ಚು ಸಂದರ್ಭೋಚಿತ, ಮುಖಾಮುಖಿ ಬೋಧನೆ–ಕಲಿಕೆಯ ಮಾರ್ಗಗಳನ್ನು ಅನುಸರಿಸುತ್ತಿವೆ. ಇದು, ಪೋಷಕರಿಗೆ ಆನ್‌ಲೈನ್ ಶಿಕ್ಷಣದ ಬಗ್ಗೆ ಅತೃಪ್ತಿಯಿದೆ ಮತ್ತು ಶಾಲೆಗಳು ಪ್ರಾರಂಭವಾದರೆ, ಸೂಕ್ತ ಆರೋಗ್ಯ ಸುರಕ್ಷಾ ಕ್ರಮಗಳನ್ನು ಕೈಗೊಂಡರೆ, ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ತಯಾರಿದ್ದಾರೆ ಎಂಬ ಈ ಅಧ್ಯಯನದ ಫಲಿತಾಂಶವನ್ನೇ ಬೆಂಬಲಿಸುತ್ತದೆ.

ಈ ಅಧ್ಯಯನವು, ತುರ್ತಾಗಿ ಸರ್ಕಾರಿ ಶಾಲೆಗಳ ಮಕ್ಕಳಿಗೆ ಮತ್ತು ಶಿಕ್ಷಕರಿಗೆ ಸೂಕ್ತ ಸುರಕ್ಷಾ ಕ್ರಮಗಳನ್ನು ಕೈಗೊಂಡು ಶಾಲೆಗಳನ್ನು ಹಂತಹಂತವಾಗಿ ತೆರೆಯಬೇಕಾಗಿರುವುದು ಸೂಕ್ತ ಎಂಬುದನ್ನು ಸೂಚಿಸುತ್ತದೆ. ಹಾಗೆ ಶಾಲೆಗಳು ಪುನರಾರಂಭವಾಗುವ ಸ್ಥಿತ್ಯಂತರದ ಅವಧಿಯಲ್ಲಿ ಸಂದರ್ಭ ಆಧಾರಿತ ನೇರ ಬೋಧನೆ ಹಾಗೂ ಶಿಕ್ಷಕರ ಉಪಸ್ಥಿತಿಯೊಂದಿಗೆ ಮುಖಾಮುಖಿಯಾಗುವ ತರಗತಿಗಳು ಸೂಕ್ತವೆಂದು ಸಲಹೆ ನೀಡುತ್ತದೆ.

# ಪರಾಮರ್ಶನೆಗಳು


Mukunda, K, V. 2019. What did you ask at school today? Noida: HarperCollins.

UNICEF. 2020. Covid-19: Are children able to continue learning during school closures? New York: UNICEF.

Vegas, Emiliana. 2020. School closures, government responses, and learning inequality around the world during COVID-19. URL: https://www.brookings.edu/research/school-closures-government-responsesand-learning-inequality-around-the-world-during-covid-19/

Vyas, A. 2020. Status Report - Government and Private Schools During COVID-19. Oxfam, India.

